# ಶಾಲಾ ಶಿಕ್ಷಣದ ಪ್ರಸಕ್ತ ಸನ್ನಿವೇಶದಲ್ಲಿ ಶಿಕ್ಷಕರ ಅಸ್ಮಿತೆಯ ಕಾಳಜಿಗಳು (ಪರಿಕಲ್ಪನಾತ್ಮಕ ಪ್ರಬಂಧ)

– ಕುಮಾರ ಸ್ವಾಮಿ ಎಚ್.

## ಲೇಖನದ ಸಾರಾಂಶ

*ಶಿಕ್ಷಕ ತನ್ನ ಅಸ್ಮಿತೆಯನ್ನು ರೂಪಿಸಿಕೊಳ್ಳುವಲ್ಲಿ ಅನೇಕ ಬಾಹ್ಯ ಕಾರಣಗಳು ಪ್ರಭಾವ ಬೀರುತ್ತವೆ. ತಾನು ಬೆಳೆದ ಬಗೆ, ಪಡೆದ ಶಿಕ್ಷಣ, ವೃತ್ತಿಪರ ತರಬೇತಿ, ಆರ್ಥಿಕ ಸಾಮಾಜಿಕ ಹಿನ್ನೆಲೆ, ಸಮಾಜದ ನಿರೀಕ್ಷೆಗಳು ಮತ್ತು ಒತ್ತಾಸೆಗಳು ಮುಂತಾದವು. ಇವೆಲ್ಲವುಗಳ ಹೊರತಾಗಿ ತನ್ನ ವೃತ್ತಿಯ ಆಶಯಗಳು, ತಾನಿರುವ ಸಂದರ್ಭ, ಅಗತ್ಯಗಳಿಗೆ ತಕ್ಕಂತೆ ತನ್ನ ವ್ಯಕ್ತಿತ್ವ ಮತ್ತು ವೃತ್ತಿಪರತೆಯನ್ನು ನಿರಂತರವಾಗಿ ರೂಪಿಸಿಕೊಳ್ಳುವುದು ಮತ್ತು ಬದಲಾಗುತ್ತಿರುವ ಶೈಕ್ಷಣಿಕ ಚಿಂತನೆಗೆ ತೆರೆದುಕೊಳ್ಳುವುದು ಪ್ರತಿಯೊಬ್ಬ ಶಿಕ್ಷಕನ ಜವಾಬ್ದಾರಿಯಾಗಿರುತ್ತದೆ. ಯಾವುದೇ ಸಿದ್ಧ ಮಾದರಿಗಳನ್ನು ಮೀರಿ ಶಿಕ್ಷಕರು ತಮ್ಮ ಆಂತರಿಕ ಬಲದಿಂದಲೇ ಅಸ್ಮಿತೆಯನ್ನು ಕಂಡುಕೊಳ್ಳಬೇಕು ಎನ್ನುವುದನ್ನು ಪ್ರತಿಪಾದಿಸಿ ಅಂತಹ ಅಸ್ಮಿತೆಯನ್ನು ಶಿಕ್ಷಕರು ಬೆಳೆಸಿಕೊಳ್ಳಲು ಎಲ್ಲ ರೀತಿಯ ಅವಕಾಶಗಳನ್ನು ಶಿಕ್ಷಣ ವ್ಯವಸ್ಥೆ ಕಲ್ಪಿಸಬೇಕೆಂದು ಲೇಖಕರು ಸೂಚಿಸುತ್ತಾರೆ.*

## ಪೀಠಿಕೆ

ಶಿಕ್ಷಕರು ಮೊದಲಿಗೆ ಮನುಷ್ಯರು. ಬಳಿಕ ಶಿಕ್ಷಕರು ಹಾಗೂ ಅಂತಿಮವಾಗಿ ಅವರು ವಿಷಯ ಶಿಕ್ಷಕರು. ಅವರ ಅಸ್ಮಿತೆಯೂ ಈ ರೀತಿಯೇ ರೂಪುಗೊಂಡಿರುತ್ತದೆ. ವ್ಯಕ್ತಿಯ ಅಸ್ಮಿತೆ ಸಮಾಜದಲ್ಲಿ ಹೇಗೆ ರೂಪುಗೊಳ್ಳುತ್ತದೆಯೋ ಅದೇ ರೀತಿ ಶಿಕ್ಷಕರ ಅಸ್ಮಿತೆಯೂ ರೂಪುಗೊಳ್ಳುತ್ತದೆ. ಆದರೆ ಶಿಕ್ಷಕರು ಬರೀ ವ್ಯಕ್ತಿಗಳಾಗಿರದೆ ಸಮಾಜದಲ್ಲಿ ಒಂದು ಜವಾಬ್ದಾರಿಯನ್ನು ನಿರ್ವಹಿಸುವ ವೃತ್ತಿಪರರರೂ ಆಗಿರುತ್ತಾರೆ. ಈ ಜವಾಬ್ದಾರಿಯೇ ಅವರಿಗೆ ಹೊಸದೊಂದು ಗುರುತಿಸಿಕೊಳ್ಳುವಿಕೆ ನೀಡುತ್ತದೆ. ಆದ್ದರಿಂದ ಶಿಕ್ಷಕರನ್ನು ಅರ್ಥೈಸಿಕೊಳ್ಳುವಾಗ ಅವರ ಅಸ್ಮಿತೆಯನ್ನು ಈ ಸಂಕೀರ್ಣ ರಚನೆಯೊಳಗೆ ವಿಶ್ಲೇಷಿಸುವುದು ಮುಖ್ಯವಾಗುತ್ತದೆ. ಶಿಕ್ಷಕರು ತಮ್ಮನ್ನು ತಾವು ಹೇಗೆ ಅರ್ಥೈಸಿಕೊಳ್ಳುತ್ತಾರೆ ಎನ್ನುವುದರ ಮೇಲೆ ಪ್ರಭಾವ ಬೀರುವ ಅಂಶಗಳನ್ನು ಈ ಕೆಳಗಿನ ಆಯಾಮಗಳಲ್ಲಿ ಅರ್ಥಮಾಡಿಕೊಳ್ಳಬಹುದು.

## ಶೈಕ್ಷಣಿಕ ಕಾಣ್ಕೆ ಹಾಗೂ ನೀತಿಗಳಲ್ಲಿ ತರುವ ಬದಲಾವಣೆಗಳು

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005 ರಚನಾವಾದವನ್ನು ದೊಡ್ಡ ಮಟ್ಟದಲ್ಲಿ ನಮ್ಮ ಶಿಕ್ಷಕರೆದುರಿಗಿರಿಸಿತು. ಶಾಲಾ ಶಿಕ್ಷಣದ ಚಿಂತನೆಯಲ್ಲಿ ಅದು ಒಂದು ದೊಡ್ಡ ಬದಲಾವಣೆಯನ್ನೇ ತಂದಿತು. ಆದರೆ ಅದನ್ನು ಒಪ್ಪಿ ಅನುಷ್ಠಾನಿಸಲು ಕೆಲವು ರಾಜ್ಯಗಳು ತಕ್ಷಣಕ್ಕೇ ಒಪ್ಪಲಿಲ್ಲ; ಇನ್ನು ಕೆಲವು ಒಪ್ಪಿದರೂ ಅದನ್ನು ಸ್ಥಳೀಯ ಅಗತ್ಯತೆಗಳಿಗೆ ಅನುಗುಣವಾಗಿ ಮರುವಿನ್ಯಾಸ ಮಾಡಿಕೊಳ್ಳುವಲ್ಲಿ ಸಮಸ್ಯೆಗಳನ್ನೆದುರಿಸಿದವು. ಕೊನೆಯಲ್ಲಿ ಶಿಕ್ಷಕರೂ ರಚನಾವಾದಿ ತತ್ವಗಳ ಕುರಿತಂತೆ ಹಲವು ಪ್ರಶ್ನೆಗಳನ್ನು ಕೇಳುತ್ತಾ ಆಚರಣೆಗಳಿಂದ ದೂರವೇ ಉಳಿಯಲು ಪ್ರಯತ್ನಿಸಿದರು.

ಇದೇ ರೀತಿಯ ಪ್ರತಿಕ್ರಿಯೆ ಮುಂದೆ ನಿರಂತರ ಹಾಗೂ ಸಮಗ್ರ ಮೌಲ್ಯಮಾಪನವನ್ನು ಜಾರಿಗೆ ತಂದಾಗಲೂ ಕಂಡು ಬಂದಿತು. 2007ರಲ್ಲಿ ಇಲಾಖೆ 1–4 ತರಗತಿಗಳಲ್ಲಿ ಇಂಗ್ಲಿಷ್ ಕಲಿಸಲು ಸಂಪನ್ಮೂಲ ಪುಸ್ತಕಗಳನ್ನು ತಯಾರು ಮಾಡಿ ರಾಜ್ಯ ಮಟ್ಟದಲ್ಲಿ ಶಿಕ್ಷಕರ ತರಬೇತಿ ಕೈಗೊಂಡಾಗಲೂ ಇದೇ ರೀತಿಯ ಪ್ರತಿಕ್ರಿಯೆ ಕಂಡು ಬಂದಿತು.

ಈ ಅನುಭವ ಈ ಮೂರೂ ಸಂದರ್ಭಗಳಲ್ಲಿ ಶಿಕ್ಷಕ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುವಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದ ಈ ಲೇಖಕನದಾಗಿತ್ತು. ಈ ಎಲ್ಲ ಸಂದರ್ಭಗಳಲ್ಲಿಯೂ ಶಿಕ್ಷಕರನ್ನು ಕಾಡಿದ್ದು ಅವರ ಅಸ್ಮಿತೆಯ ಪ್ರಶ್ನೆಯೇ. ಇಂಗ್ಲಿಷ್ ಬೋಧನೆಯ ಹೊಸ ವಿಧಾನಗಳನ್ನು ಸೂಚಿಸಿದಾಗ ಶಿಕ್ಷಕರ ಪ್ರಶ್ನೆಗಳು ಈ ರೀತಿ ಇದ್ದವು: 'ಖಾಸಗಿ ಶಾಲೆಗಳಲ್ಲಿ ಇಂಗ್ಲಿಷ್ ಬೇರೆ ರೀತಿ ಹೇಳಿಕೊಡುತ್ತಾರೆ. ನಾವು ಮಾತ್ರ ಯಾಕೆ ಹೀಗೆ ಬೋಧಿಸಬೇಕು?' ಅವರ ಈ ಪ್ರಶ್ನೆಯೊಳಗೆ ಇದ್ದುದು ಅಸ್ಮಿತೆಯ ಪ್ರಶ್ನೆಯೇ. ಖಾಸಗಿ ಶಾಲೆಗಳೆಂದರೆ ಪ್ರತಿಷ್ಠೆಯ ಕೇಂದ್ರಗಳು, ಅಲ್ಲಿ ಮಾಡುವುದೆಲ್ಲ ಶ್ರೇಷ್ಠ ಮತ್ತು ಆ ರೀತಿ ಮಾಡುವುದೇ ಸಮಾಜದಲ್ಲಿ ತಾವೂ ತಮ್ಮ ಹಾಗೂ ತಮ್ಮ ಶಾಲೆಯ ಅಸ್ಮಿತೆ ಉಳಿಸಿಕೊಳ್ಳುವ ವಿಧಾನ ಎಂದು ಅಂದುಕೊಂಡಿದ್ದರಿಂದಲೇ ಈ ರೀತಿಯ ಪ್ರಶ್ನೆಗಳು ಮೂಡಿದವು. ಇರುವ ಅಸ್ಮಿತೆ ಉಳಿಸಿಕೊಂಡರೆ ಸಾಕು, ಹೊಸ ಪ್ರಯೋಗಗಳೇನೂ ಬೇಡ ಎನ್ನುವುದು ಇನ್ನೊಂದು ಅಂಶ. ಬದಲಾವಣೆಗಳನ್ನು ತರುವ ಪ್ರಕ್ರಿಯೆಯಲ್ಲಿ ತಪ್ಪುಗಳಾದಾಗ ಇರುವ ಅಸ್ಮಿತೆಯೂ ಹೋಗಿಬಿಡುತ್ತದಲ್ಲಾ ಎಂಬ ಭಯ ಬಹಳ ಮಂದಿಯನ್ನು ಕಾಡಿತ್ತು. ಇಲಾಖೆ ಶಿಕ್ಷಕರಿಗೆ ಬೆಂಬಲ ನೀಡಲು ನಡೆಸಿದ ದೂರಸಂಪರ್ಕ ಕಾರ್ಯಕ್ರಮಗಳಲ್ಲಿ ಈ ಪ್ರಶ್ನೆಗಳೇ ಮತ್ತೆ ಮತ್ತೆ ಬರುತ್ತಿದ್ದುದು ಇದನ್ನು ಬೆಂಬಲಿಸುತ್ತದೆ. ಶಿಕ್ಷಣ ನೀತಿ ಹಾಗೂ ಆಚರಣೆಗಳಲ್ಲಿ ತರುವ ಬದಲಾವಣೆಗಳು ತಮ್ಮ ಅಸ್ಮಿತೆಗೊಂದು ಬೆದರಿಕೆ ಎಂದು ಅಂದುಕೊಳ್ಳುವುದರಿಂದಲೇ ಬದಲಾವಣೆಗಳಿಗೆ ಪ್ರತಿರೋಧ ಹುಟ್ಟಿಕೊಳ್ಳುತ್ತದೆ.

ಅಂತೆಯೇ ಇನ್ನೊಂದು ಗುಂಪು ಸರಕಾರ, ಇಲಾಖೆ, ಅಧಿಕಾರಿಗಳು ಏನೆಲ್ಲ ಹೇಳುತ್ತಾರೆಯೋ ಅವನ್ನೆಲ್ಲ ತೆಪ್ಪಗೆ ಅನುಷ್ಠಾನಿಸಿಕೊಂಡು ಮುಂದುವರಿಯುತ್ತದೆ. ಇವರು ಯಾರ ಜತೆಗೂ ತಕರಾರುಗಳಿಲ್ಲದವರು. ಯಾವ ಭಿನ್ನಾಭಿಪ್ರಾಯ, ಕಲಹಗಳಿಗೂ ಎಡೆಮಾಡಿಕೊಡದೆ ಇರುವ ಇವರು ತಮ್ಮ ಅಸ್ಮಿತೆ ಬಗ್ಗೆ ಹೆಚ್ಚೇನೂ

ಚಿಂತಿಸದವರು. ಇರುವುದರೊಳಗೆ ಯಾವ ರೀತಿಯ ಅಸ್ಮಿತೆ ದೊರಕಿದೆಯೋ ಅದುವೇ ಮಹಾಪ್ರಸಾದ ಎಂದು ಮುಂದುವರಿಯುವುದು ಈ ಗುಂಪಿನ ಸ್ವಭಾವ.

## ವೃತ್ತಿಪರ ಸಾಮರ್ಥ್ಯಗಳು

ಯಾವ ವೃತ್ತಿಪರರನ್ನು ಮಾತನಾಡಿಸಿದರೂ ಅವರು ತಾವು ತಮ್ಮ ವೃತ್ತಿಯನ್ನು ಅತ್ಯುತ್ತಮವಾಗಿ ನಿರ್ವಹಿಸುತ್ತೇವೆ ಎಂದೇ ಹೇಳುತ್ತಾರೆ, ಅದನ್ನು ನಂಬುತ್ತಾರೆ ಮತ್ತು ತಮ್ಮ ಆಚರಣೆಗಳನ್ನು ಅವಿದ್ದಂತೆಯೇ ಮುಂದುವರಿಸಲು ಬಯಸುತ್ತಾರೆ. ಅದು ಅವರ ಅಸ್ಮಿತೆಯ ಪ್ರಶ್ನೆ. ಬದಲಾವಣೆಗಳು ಬಂದಾಗ ಬೆದರುವುದೂ ಇದಕ್ಕೇ. ಆದರೆ ಬದಲಾವಣೆಗಳು ತಮ್ಮ ಅಸ್ಮಿತೆಗೊಂದು ಘನತೆ ತರುತ್ತವೆ ಎಂದು ಸ್ಪಷ್ಟವಾದರೆ ಜನರು ಬದಲಾವಣೆಗಳನ್ನು ಒಪ್ಪಿಕೊಳ್ಳುತ್ತಾರೆ. ಶಿಕ್ಷಕ ಶಿಕ್ಷಣದ ಒಂದು ಸವಾಲು ಇದೇ ಆಗಿದೆ.

## ವೃತ್ತಿಗೆ ಸಂಬಂಧಿಸಿದಂತೆ ಶಿಕ್ಷಕರ ಕುರಿತಂತೆ ಸಾಂಸ್ಥಿಕ ಹಾಗೂ ಸಾಮುದಾಯಿಕ ಪರಿಕಲ್ಪನೆಗಳು

ಶಿಕ್ಷಕರು ಹೇಗಿರಬೇಕು ಎಂಬ ಬಗ್ಗೆ ಸಮುದಾಯದ ಎಲ್ಲರಿಗೂ ಒಂದು ಪರಿಕಲ್ಪನೆ ಇದೆ. ಅತ್ಯುತ್ತಮ ಶಿಕ್ಷಕರ ಮಾದರಿಗಳನ್ನು ನೋಡಿದ ಮಂದಿ ತಮ್ಮ ಊರಿನ ಶಾಲೆಯ ಶಿಕ್ಷಕರೂ ಹಾಗೇ ಇರುತ್ತಾರೆ ಎಂದು ನಿರೀಕ್ಷಿಸುತ್ತಾರೆ. ಶಿಕ್ಷಕರು ಈ ಸ್ಥಾಪಿತ ಮಾದರಿಗಳನ್ನು ಮೀರಿ ತಮ್ಮ ಅಸ್ಮಿತೆಯನ್ನು ಸ್ಥಾಪಿಸಿಕೊಳ್ಳಬೇಕಾಗುತ್ತದೆ. ತಾವು ಕೂಡಾ ಮಕ್ಕಳಿಗೆ ಒಳಿತು ಮಾಡುವವರೇ ಎಂಬ ಅಂಶವನ್ನು ಸಮುದಾಯಕ್ಕೆ ಅವರು ಮನದಟ್ಟು ಮಾಡಬೇಕಾಗುತ್ತದೆ. ಹಾಗಾಗದಿದ್ದರೆ ಅವರೂ ಸಮುದಾಯದ ಟೀಕೆಗೆ ಒಳಗಾಗಬೇಕಾಗುತ್ತದೆ. ಯಾವುದೋ ಸಿದ್ಧ ಮಾದರಿಗನುಗುಣವಾಗಿ ನಮ್ಮ ಅಸ್ಮಿತೆ ರೂಪಿಸಿಕೊಳ್ಳುವುದು ಎಷ್ಟು ಕಷ್ಟವೋ, ಅದನ್ನು ಮೀರಿ ನಮ್ಮದೇ ಆದ ಅಸ್ಮಿತೆ ರೂಪಿಸಿಕೊಳ್ಳುವುದೂ ಅಷ್ಟೇ ಕಷ್ಟ.

## ಬಾಲ್ಯ, ಶಿಕ್ಷಣ ಹಾಗೂ ವೃತ್ತಿಪರ ತರಬೇತಿ

ಪ್ರತಿ ವ್ಯಕ್ತಿಯ ಅಸ್ಮಿತೆಯ ಹಿಂದೆ ಈ ಮೂರು ಅಂಶಗಳು ಕೆಲಸ ಮಾಡುತ್ತವೆ. ಶಿಕ್ಷಕರಾಗುವವರು ಎಂತಹ ಬಾಲ್ಯದ ಅನುಭವಗಳನ್ನು ಪಡೆದಿದ್ದರು ಎನ್ನುವುದು ಅವರು ಮಕ್ಕಳನ್ನು ಎಷ್ಟರಮಟ್ಟಿಗೆ ಅರ್ಥ ಮಾಡಿಕೊಳ್ಳಬಲ್ಲರು ಎನ್ನುವುದನ್ನು ನಿರ್ಧರಿಸುವ ಒಂದು ಅಂಶ. ಅಂತೆಯೇ ಅವರಿಗೆ ದೊರಕಿದ ಶಿಕ್ಷಣ ಹಾಗೂ ವೃತ್ತಿಪರ ತರಬೇತಿಗಳ ಗುಣಮಟ್ಟವೂ ಅವರ ಅಸ್ಮಿತೆಯನ್ನು ಸ್ಥಾಪಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನಾವು ಶಿಕ್ಷಣ ಮತ್ತು ತರಬೇತಿ ಪಡೆದ ಸಂಸ್ಥೆಗಳ ಹಿರಿಮೆಯಿಂದಾಗಿ ನಮಗೂ ಒಂದು ಮಟ್ಟದ ಪ್ರತಿಷ್ಠೆ ತಂದುಕೊಡುತ್ತವೆ. ತಾವು ಇಂತಹ ಕಾಲೇಜಿನಲ್ಲಿ ಓದಿದ್ದೆವು ಎನ್ನುವುದನ್ನು ಎಲ್ಲರೂ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಆ ಸಂಸ್ಥೆಯ ಮೌಲ್ಯಗಳನ್ನು ಅಳವಡಿಸಿಕೊಂಡು ಆಚರಿಸುತ್ತಾರೆ. ಶಿಕ್ಷಕರ ಅಸ್ಮಿತೆ ನಿರ್ಧರಿಸುವಲ್ಲಿ ಅವರು ತರಬೇತಿ ಪಡೆದ ಸಂಸ್ಥೆಗಳಿಗಿರುವ ಸ್ಥಾನವೂ ಪ್ರಮುಖ ಪಾತ್ರ ವಹಿಸುತ್ತದೆ.

**ಆರ್ಥಿಕ, ಸಾಮಾಜಿಕ ಪರಿಸ್ಥಿತಿ, ಕೌಟುಂಬಿಕ ಜವಾಬ್ದಾರಿಗಳು**

ಶಿಕ್ಷಕ ತರಬೇತಿ ಪಡೆಯಲು ನೋಂದಾಯಿಸಿಕೊಳ್ಳುವವರಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಿರುವುದು ಗಮನಿಸಬೇಕಾದ ಅಂಶ. ಸರಾಸರಿ ಸುಮಾರು 75% ವಿದ್ಯಾರ್ಥಿ–ಶಿಕ್ಷಕರು ಹೆಣ್ಣುಮಕ್ಕಳಾಗಿರುವುದು ಕಳೆದ ಐದು ವರ್ಷಗಳ ಬಿ.ಎಡ್. ದಾಖಲಾತಿ ಗಮನಿಸಿದಾಗ ತಿಳಿಯುವ ಅಂಶ. ಶಿಕ್ಷಕ ವೃತ್ತಿ ಹೆಣ್ಣುಮಕ್ಕಳಿಗೆ ಸೂಕ್ತ, ಮದುವೆಯಾಗಿ ಹೋದಾಗ ಗಂಡನ ಮನೆ ಇರುವೆಡೆಯಲ್ಲಿಯೂ ಕೆಲಸಕ್ಕೆ ಸೇರಬಹುದು, ಕಡಿಮೆ ಸಂಬಳವಾದರೂ ದುಡಿಮೆಗೆ ತೊಂದರೆಯಿಲ್ಲ. ಶಿಕ್ಷಕಿಯರಾದರೆ ಕುಟುಂಬದ ಜವಾಬ್ದಾರಿ ನಿರ್ವಹಿಸುವುದು ಸುಲಭ ಎಂಬುದು ಬಹಳಷ್ಟು ಪೋಷಕರ ನಂಬಿಕೆ. ಇದು ಪೋಷಕರನ್ನು ಮಾತನಾಡಿಸಿದಾಗ ತಿಳಿದು ಬಂದ ವಿಷಯ. ವಿದ್ಯಾರ್ಥಿನಿಯರೂ ಬಹಳ ಮಟ್ಟಿಗೆ ಇದನ್ನು ಒಪ್ಪಿಕೊಳ್ಳುತ್ತಾರೆ. ಎಂದರೆ, ಬಿ.ಎಡ್. ವ್ಯಾಸಂಗಕ್ಕಾಗಿ ದಾಖಲಾಗುವಾಗಲೇ ಅವರಿಗೊಂದು ಅಸ್ಮಿತೆ ಪ್ರಾಪ್ತವಾಗಿರುತ್ತದೆ. ಅವರು ಅದನ್ನು ಉಳಿಸಿಕೊಂಡು ಹೋಗುವುದೊಂದೇ ಅವರ ಮುಂದಿರುವ ಕೆಲಸ. ಈ ರೂಢ ಮಾದರಿಯ ಹೊರತಾದ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡುವವರ ಸಂಖ್ಯೆ ಕಡಿಮೆ, ಯಾಕೆಂದರೆ ಅದು ಅವರನ್ನು ವಿಚಲಿತರನ್ನಾಗಿಸುತ್ತದೆ.

ಅಂತೆಯೇ ಕೆಲಸಕ್ಕೆ ಸೇರಿದ ಬಳಿಕ ತಮ್ಮ ಜಾತಿ, ಮತ, ಸಾಮಾಜಿಕ ಸ್ಥಾನಮಾನಗಳನ್ನು ಉಳಿಸಿಕೊಳ್ಳುವುದು ಮುಖ್ಯವಾದಾಗಲೂ ಅಸ್ಮಿತೆ ಒಂದು ರೂಢ ಮಾದರಿಯೊಳಗೆ ಸಿಲುಕಿಕೊಳ್ಳುತ್ತದೆ. ಈ ಅಂಶಗಳು ಶಿಕ್ಷಕ ವೃತ್ತಿಯಲ್ಲಿರುವವರು ಹೇಗೆ ಉಡುಪುಗಳನ್ನು ತೊಡಬೇಕು, ಹೇಗೆ ವರ್ತಿಸಬೇಕು, ಯಾರೊಡನೆ ಹೇಗೆ ಒಡನಾಡಬೇಕು ಎಂಬಿತ್ಯಾದಿ ವಿಷಯಗಳನ್ನೂ ನಿರ್ಧರಿಸಿಬಿಡುತ್ತವೆ. ಒಂದು ಮಟ್ಟಕ್ಕೆ ಇದು ಸರಿಯೇನೋ ಅನಿಸಿದರೂ, ರೂಢ ಮಾದರಿಗಳ ಪ್ರಭಾವದಲ್ಲಿ ತಮ್ಮ ನೈಜ ಅಸ್ಮಿತೆಯನ್ನು ಅನಾವರಣಗೊಳಿಸಿಕೊಳ್ಳಲು ಸಾಧ್ಯವಾಗದಂತಹ ಸ್ಥಿತಿಗೆ ಬೀಳುವುದು ಶಿಕ್ಷಕರ ವೃತ್ತಿಪರ ಬೆಳವಣಿಗೆಯ ದೃಷ್ಟಿಯಿಂದ ಅಪೇಕ್ಷಣೀಯವಲ್ಲವೇನೋ.

ಈ ಆಯಾಮಗಳಲ್ಲಿ ನಿಜಕ್ಕಾದರೂ ಮೊದಲ ಎರಡು ಮಾತ್ರ ಪ್ರತ್ಯಕ್ಷ ಪ್ರಭಾವ ಬೀರುವಂತಹವು. ಆದರೆ ಉಳಿದ ನಾಲ್ಕು ಆಯಾಮಗಳು ಎಷ್ಟರ ಮಟ್ಟಿಗೆ ಪ್ರಭಾವ ಬೀರುತ್ತವೆ ಎಂದರೆ ನೇರ ಪ್ರಭಾವ ಬೀರುವ ಅಂಶಗಳನ್ನೂ ಮೀರಿ ಅವು ಶಿಕ್ಷಕರ ವ್ಯಕ್ತಿತ್ವಗಳನ್ನು ರೂಪಿಸುತ್ತವೆ. ಒಂದೊಮ್ಮೆ ಮೊದಲ ಎರಡು ಆಯಾಮಗಳು ಮಾತ್ರ ಶಿಕ್ಷಕರ ಅಸ್ಮಿತೆಯನ್ನು ರೂಪಿಸುತ್ತವೆ ಎಂದಾದರೆ ಅವನ್ನು ಸುಲಭವಾಗಿ ನಮಗೆ ಬೇಕಾದಂತೆ ನಿಯಂತ್ರಿಸಿಕೊಳ್ಳಬಹುದು. ಆದರೆ ಉಳಿದವುಗಳ ಮೇಲೆ ನಮಗೆ ಯಾವುದೇ ನಿಯಂತ್ರಣ ಇಲ್ಲದಿರುವುದರಿಂದ ಮತ್ತು ಶಿಕ್ಷಕರು ಆ ಎಲ್ಲ ಆಯಾಮಗಳ ಪ್ರಭಾವಕ್ಕೆ ಒಳಗಾಗದಿರಲು ಸಾಧ್ಯವಿಲ್ಲದಿರುವುದರಿಂದ ನಮಗೆ ಅವೇ ಮುಖ್ಯವಾಗುತ್ತವೆ. ಇದು ಒಂದು ರೀತಿಯಲ್ಲಿ ಮರೆಯಲ್ಲಿರುವ ಪಠ್ಯಕ್ರಮದಂತೆ (ಹಿಡನ್ ಕರಿಕ್ಯುಲಮ್). ಇವು ಶಿಕ್ಷಕರ ಚಿಂತನೆಯನ್ನೇ ಪ್ರಭಾವಿಸಿ ಅವರು ರೂಢಿಸಿಕೊಳ್ಳುವ ಬದುಕು ಹಾಗೂ ಅವರ ಮನೋಧೋರಣೆಗಳನ್ನು ರೂಪಿಸುತ್ತವೆ.

ಅಂತಿಮವಾಗಿ ಶಿಕ್ಷಕರು ತಮ್ಮ ವೃತ್ತಿಯನ್ನು ನಿಭಾಯಿಸುವ ಸಂದರ್ಭದಲ್ಲಿ ಕಾರ್ಯಶೀಲರಾಗುವುದು ಈ ನೆಲೆಗಳಿಂದಲೇ.

ಬಹುಶಃ ಮೇಲಿನ ಚರ್ಚೆಯನ್ನು ಆಧಾರವಾಗಿಟ್ಟುಕೊಂಡು ಕೆಲವೊಂದು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸಬಹುದಾಗಿದೆ. ಪ್ರಶ್ನೆಗಳು ಈ ರೀತಿ ಇವೆ:

1. ಈ ಆಯಾಮಗಳು ಹೇಗೆ ಶಿಕ್ಷಕರನ್ನು ಪ್ರಭಾವಿಸುತ್ತವೆಯೋ ಅದೇ ರೀತಿ ಅವರೂ ಈ ಆಯಾಮಗಳ ಮೇಲೆ ಪ್ರಭಾವ ಬೀರಲಾರರೇ? ಸಮುದಾಯದ ಧೋರಣೆಗಳನ್ನು ಪರಿಷ್ಕರಿಸುವಲ್ಲಿ ಶಿಕ್ಷಕರ ಪಾತ್ರವೇನು?
2. ಶಿಕ್ಷಕರ ಅಸ್ಮಿತೆಯನ್ನು ಸಮಕಾಲೀನ ಶಿಕ್ಷಣ-ಚಿಂತನೆಗೆ ಅನುಸಾರವಾಗಿ ರೂಪಿಸಬೇಕಾದ ಸಂದರ್ಭದಲ್ಲಿ ಅಪೇಕ್ಷಣೀಯ ರಚನೆಗಳಾವುವು?
3. ಪರೋಕ್ಷ ಅಂಶಗಳ ಪ್ರಭಾವದ ಹೊರತಾಗಿ ಒಂದು ಅಸ್ಮಿತೆಯನ್ನು ಕಟ್ಟಿಕೊಳ್ಳಬಲ್ಲ ದೃಢನಂಬಿಕೆಗಳು ಶಿಕ್ಷಕರಲ್ಲಿ ಬೆಳೆಯಬೇಕಾದರೆ ಅವರಿಗೆ ಯಾವ ರೀತಿಯ ಬೆಂಬಲದ ಆವಶ್ಯಕತೆ ಇದೆ?

ಮೂರನೆಯ ಪ್ರಶ್ನೆಗೆ ನೀಡುವ ಉತ್ತರವೂ ಮೊದಲಿನ ಎರಡೂ ಪ್ರಶ್ನೆಗಳನ್ನು ಉತ್ತರಿಸುತ್ತದೆ.

ಮೊದಲಿಗೆ ಶಿಕ್ಷಕರು ಅವರಿದ್ದಂತೆಯೇ ಅವರನ್ನು ಒಪ್ಪಿಕೊಳ್ಳುವುದು ಮುಖ್ಯ ಅನಿಸುತ್ತದೆ. ಅಸ್ಮಿತೆಯ ಪ್ರಶ್ನೆಯೇ ಇತರರ ಒಪ್ಪಿಕೊಳ್ಳುವಿಕೆಯ ಮೇಲೆ ನಿಂತಿದೆ. ಒಪ್ಪಿಕೊಳ್ಳುವಿಕೆಯ ಭದ್ರತೆ ಅವರು ಪ್ರಯೋಗಗಳಲ್ಲಿ ತೊಡಗಿಕೊಳ್ಳಲು ಪ್ರೋತ್ಸಾಹ ನೀಡುತ್ತದೆ. ಯಾಕೆಂದರೆ ಅಲ್ಲಿ ತಿರಸ್ಕಾರದ ಬೆದರಿಕೆ ಇಲ್ಲವಲ್ಲ. ಒಪ್ಪಿಕೊಳ್ಳುವಲ್ಲಿಂದಲೇ ಬದಲಾವಣೆಗಳು ಆರಂಭವಾಗುವುದು. ಅಂದರೆ ಬದಲಾವಣೆಗಳ ಹುಡುಕಾಟ ಆರಂಭಿಸಲು ಬೇಕಾದ ಬೆಂಬಲ ನೀಡುವುದು ಅಗತ್ಯವಿದೆ. ಒಮ್ಮೆ ಹುಡುಕಾಟ ಆರಂಭವಾದರೆ ಬಳಿಕ ಹತ್ತಾರು ಆಯ್ಕೆಗಳನ್ನು ಅವರ ಮುಂದಿಡಬಹುದು. ಬದಲಾವಣೆಯ ತುಡಿತ ಉಂಟಾಗುವಂತೆ ಮಾಡುವುದೇ ಸವಾಲು. ಅದಕ್ಕೆ ಒಪ್ಪಿಕೊಳ್ಳುವಿಕೆಯೇ ಸರಿಯಾದ ಮೊದಲ ಹೆಜ್ಜೆ. ವೈಯಕ್ತಿಕ, ಸಾಂಸ್ಥಿಕ ನೆಲೆಗಳಲ್ಲಿ, ಸಂಪನ್ಮೂಲಗಳ ಒದಗಿಸುವಿಕೆಯಲ್ಲಿ, ಮೆಚ್ಚಿಕೊಳ್ಳುವಿಕೆ, ವಿಮರ್ಶೆ ಇತ್ಯಾದಿ ಹಿಮ್ಮಾಹಿತಿಗಳಲ್ಲಿ ಶಿಕ್ಷಕರಿಗೆ ಬೇಷರತ್ತಾದ ಬೆಂಬಲ ಸಿಗುತ್ತದೆ ಎಂದಾದರೆ ಅವರು ಬದಲಾವಣೆಗಳನ್ನು ಮಾಡಿಕೊಳ್ಳಲು ಸಿದ್ಧರಿರುತ್ತಾರೆ ಎನ್ನುವುದು ಇಲ್ಲಿನ ವಾದ. ಈ ಕುರಿತಂತೆ ಒಂದು ಗಂಭೀರ ಅಧ್ಯಯನ ಕೂಡಾ ಕೈಗೊಳ್ಳಬಹುದಾಗಿದೆ.

ಶಿಕ್ಷಕರ ಅಸ್ಮಿತೆಯನ್ನು ಶೈಕ್ಷಣಿಕ ಗುಣಮಟ್ಟದ ಸೂಚಕವನ್ನಾಗಿಯೂ ನೋಡಬಹುದು. ತಮ್ಮ ವೃತ್ತಿಯ ಬಗ್ಗೆ ಸಕಾರಾತ್ಮಕ ಧೋರಣೆಗಳನ್ನು ಬೆಳೆಸಿಕೊಳ್ಳದ ಶಿಕ್ಷಕರು, ತಮ್ಮ ವೃತ್ತಿಯ ಕುರಿತಂತೆ ಹೆಮ್ಮೆ ಮೂಡದ ಶಿಕ್ಷಕರು ಅದು ಹೇಗೆ ಶೈಕ್ಷಣಿಕ ಗುಣಮಟ್ಟವನ್ನು ಸುಧಾರಿಸಿಯಾರು? ತಮ್ಮ ಬಗ್ಗೆ, ತಮ್ಮ ಶಾಲೆಯ ಬಗ್ಗೆ ನಂಬಿಕೆಯಿಲ್ಲದ ಶಿಕ್ಷಕರು ತಮ್ಮ ಮಕ್ಕಳನ್ನು ಬೇರೊಂದು ಶಾಲೆಗೆ ಕಳುಹಿಸುತ್ತಾರೆ. ಇದರೊಂದಿಗೆ ಅವರು ನೀಡುವ ಸಂದೇಶವೇನೆಂದರೆ ತಮ್ಮ ಶಾಲೆಯಲ್ಲಿ ಏನೂ

ಸರಿಯಿಲ್ಲ ಎಂಬುದಾಗಿದೆ. ಶಿಕ್ಷಕರು ಈ ಸರಿಯಿಲ್ಲದಿರುವ ಶಾಲೆಯ ಒಂದು ಭಾಗವೇ ಆಗಿರುತ್ತಾರೆ. ತಮ್ಮನ್ನು ತಾವೇ ತಿರಸ್ಕರಿಸಿಕೊಳ್ಳುವ ಈ ನಿಲುವು ಒಂದು ಗಂಭೀರ ವಿಷಯವಾಗಿದೆ. ಬೇಷರತ್ತಾದ ಒಪ್ಪಿಕೊಳ್ಳುವಿಕೆಯಿಂದ ಶಿಕ್ಷಕರ ಧೋರಣೆಗಳು ಸಕಾರಾತ್ಮಕವಾಗಿ ರೂಪುಗೊಳ್ಳಲು ಸಾಧ್ಯ.

ಯಾರು ತಮ್ಮ ನಿಲುವುಗಳ ಬಗ್ಗೆ ಖಚಿತತೆ ಹೊಂದಿದ್ದಾರೋ, ಯಾರ ಆಚರಣೆಗಳು ಶಿಕ್ಷಣ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಮೂಡಿ ಬರುತ್ತವೆಯೋ, ಯಾರ ಮನೋಧೋರಣೆಗಳು ಮಾನವಪರವಾಗಿ, ಜೀವನಪರವಾಗಿ ಇರುತ್ತವೆಯೋ ಅಂತಹ ಶಿಕ್ಷಕರು ಸಮುದಾಯಗಳ ಅಭಿಪ್ರಾಯಗಳನ್ನು, ದೃಷ್ಟಿಕೋನಗಳನ್ನು ರೂಢಿಸಬಲ್ಲರು, ಬದಲಾಯಿಸಬಲ್ಲರು ಹಾಗೂ ಪರಿಷ್ಕರಿಸಬಲ್ಲರು. ಅಂತಿಮವಾಗಿ ಸಮಾಜದ ದೃಷ್ಟಿಕೋನ ಗಳನ್ನು ಬದಲಾಯಿಸುವುದು ನಮ್ಮ ಆಚರಣೆಗಳು ಮತ್ತು ಅವುಗಳು ಮಕ್ಕಳ ಮೇಲೆ ಮಾಡುವ ಪರಿಣಾಮಗಳು. ಶಿಕ್ಷಕರು ತಮ್ಮ ಅಸ್ಮಿತೆಯನ್ನು ಈ ನಿಟ್ಟಿನಲ್ಲಿ ರೂಪಿಸಿಕೊಳ್ಳ ಬೇಕಾಗಿದೆ. ಶಿಕ್ಷಣ ವ್ಯವಸ್ಥೆ ಅವರಿಗೆ ಇದಕ್ಕೆ ಬೇಕಾದ ಬೆಂಬಲ ನೀಡಬೇಕಾಗಿದೆ.

ಸಮಕಾಲೀನ ಶಿಕ್ಷಣ ಚಿಂತನೆಗೆ ಅನುಸಾರವಾಗಿ ಶಿಕ್ಷಕರು ತಮ್ಮ ಅಸ್ಮಿತೆ ರೂಪಿಸಿಕೊಳ್ಳಬೇಕಾದರೆ ಅವರಿಗೆ ಮೊದಲಿಗೆ ಅಮಿತ ಶೈಕ್ಷಣಿಕ ಸಂಪನ್ಮೂಲಗಳು ಲಭ್ಯವಾಗಬೇಕು. ಆ ಸಂಪನ್ಮೂಲಗಳನ್ನು ಬಳಸಲು ಅಗತ್ಯ ಬೆಂಬಲ ನೀಡಬೇಕು. ಈ ಬೆಂಬಲದಲ್ಲಿ ಭೌತಿಕ ಸವಲತ್ತುಗಳು ಹಾಗೂ ಶಿಕ್ಷಕರಿಗೆ ಸಿಗುವ ಬಿಡುವಿನ ಸಮಯ ಮುಖ್ಯ ಅನಿಸುತ್ತದೆ. ಉತ್ತಮ ಗ್ರಂಥಭಂಡಾರ, ಅಂತರ್ಜಾಲ ಸಂಪರ್ಕ, ವಿವಿಧ ಪರಿಕರಗಳ ಲಭ್ಯತೆ, ಪ್ರಿಂಟರ್ ಸೌಲಭ್ಯ, ತರಗತಿಗಳಲ್ಲಿ ಮೊಬೈಲ್ ಇತ್ಯಾದಿ ಇ–ಸಂಪನ್ಮೂಲಗಳನ್ನು ಬಳಸಲು ಅನುಮತಿ ಹಾಗೂ ಪ್ರೋತ್ಸಾಹ, ತಮ್ಮ ವಿಚಾರ, ಅನುಭವಗಳನ್ನು ಹಂಚಿಕೊಳ್ಳಲು ಅಗತ್ಯ ವೇದಿಕೆಗಳು ಲಭ್ಯವಾಗಬೇಕು. ಆದರೆ ಬಹಳ ಮುಖ್ಯವೆಂದರೆ ಈ ಎಲ್ಲ ಸವಲತ್ತುಗಳನ್ನು ಬಳಸಲು ಬೇಕಾದ ಬಿಡುವು ಕೂಡಾ ಇರಬೇಕು. ತರಗತಿಯಲ್ಲಿ ಪ್ರದರ್ಶಿಸಬೇಕಾದ ವೀಡಿಯೋವನ್ನು ಮೊದಲಿಗೆ ಶಿಕ್ಷಕರೂ ನೋಡಿರಬೇಕು, ಟಿಪ್ಪಣಿಗಳನ್ನು ಮಾಡಿಕೊಂಡಿರಬೇಕು. ಅವುಗಳನ್ನು ಹುಡುಕಿ, ಗುರುತಿಸಲೂ ಒಂದಷ್ಟು ಸಮಯ ತಗಲುತ್ತದೆ. ಚಾರ್ಟ್ ಇತ್ಯಾದಿಗಳನ್ನು ತಯಾರಿಸಲು ಕೂಡಾ ಸಮಯಾವಕಾಶ ಬೇಕು. ಈ ಸಮಯಾವಕಾಶ ಶಾಲಾ ಅವಧಿಯಲ್ಲಿಯೇ ಸಿಗಬೇಕು. ಇದೆಲ್ಲ ಶಿಕ್ಷಕರ ಜವಾಬ್ದಾರಿ, ಅವರಿಗೆ ವೇತನ ನೀಡುವುದಿಲ್ಲವೇ ಎಂದು ಕೇಳಲಾಗದು. ಅವರಿಗೂ ಖಾಸಗಿ ಜೀವನ ಇರುವುದಲ್ಲವೇ? ಶಾಲೆಗಳಲ್ಲಿ ಸಾಕಷ್ಟು ಬೆಂಬಲ ದೊರಕಿದಾಗ ಚಿಂತನೆ, ಕೆಲಸದ ವ್ಯಾಪ್ತಿ ಬಾಹ್ಯ ಒತ್ತಡವಿಲ್ಲದೆಯೇ ಹೊರಚಾಚಿಕೊಳ್ಳಲು ಆರಂಭಿಸುತ್ತದೆ. ಇದು ಆಗಬೇಕಾದ ಕೆಲಸ.

## ಶಿಕ್ಷಕರು ಎಂತಹ ಅಸ್ಮಿತೆಯನ್ನು ರೂಢಿಸಿಕೊಳ್ಳಬೇಕು?

ನಾವು ಇದುವರೆಗಿನ ಚರ್ಚೆಯಲ್ಲಿ ಅವರ ಅಸ್ಮಿತೆಯನ್ನು ಪ್ರಭಾವಿಸುವ ಅಂಶಗಳನ್ನು ಮತ್ತು ಅವರು ತಮ್ಮ ಅಸ್ಮಿತೆಯನ್ನು ರೂಪಿಸಿಕೊಳ್ಳುವಲ್ಲಿ ಇರುವ ಮಿತಿಗಳ ಕುರಿತಂತೆ ಚರ್ಚಿಸಿದೆವು. ಈ ಎಲ್ಲ ಚರ್ಚೆಯ ಒಟ್ಟಾರೆ ಆಶಯ ಏನಿತ್ತೆಂದರೆ

ಶಿಕ್ಷಕರು ಯಾವುದೇ ರೂಢಿಗತ ಅಸ್ಮಿತೆಯನ್ನು ಅಳವಡಿಸಿಕೊಂಡರೆ ಅದು ಒಟ್ಟಾರೆಯಾಗಿ ಅವರ ಸೃಜನಶೀಲತೆಗೊಂದು ಮಿತಿ ಹೇರುತ್ತದೆ ಎಂಬುದಾಗಿತ್ತು. ಹಾಗಾದರೆ ಅವರ ಅಸ್ಮಿತೆ ಹೇಗಿರಬೇಕು?

- ಅದು ಕ್ರಿಯಾಶೀಲವಾಗಿರಬೇಕು – ಯಾವುದೇ ರೂಢಿಗತ ಮಾದರಿಗಳಿಗೆ ಜೋತುಬೀಳಬೇಕಾಗಿಲ್ಲ. ಅಥವಾ ತಾವೇ ತಮ್ಮದೇ ಆದ ಒಂದು ಮಾದರಿಯನ್ನು ಸೃಷ್ಟಿಸಿಕೊಂಡು ಅದಕ್ಕೇ ತಮ್ಮನ್ನು ಮಿತಿಗೊಳಿಸಿಕೊಳ್ಳ ಬೇಕಾಗಿಲ್ಲ. ಅದು ಸಂದರ್ಭಕ್ಕೆ ಅನುಸಾರವಾಗಿ ಬದಲಾವಣೆ ಹೊಂದುತ್ತಿರಬೇಕು.
- ಅದು ಚಿಂತನಶೀಲತೆಯ ಬುನಾದಿಯ ಮೇಲೆ ಕಟ್ಟಿಕೊಂಡದ್ದಾಗಿರಬೇಕು. ಚಿಂತನಶೀಲ ಆಚರಣೆಗಳು ಮಾತ್ರವೇ ವಿದ್ಯಾರ್ಥಿಗಳ ಆವಶ್ಯಕತೆಗಳಿಗೆ ತಕ್ಕ ಶೈಕ್ಷಣಿಕ ಅನುಭವಗಳನ್ನು ನೀಡಲು ಎಡೆಮಾಡಿಕೊಡುತ್ತವೆ. ಇದರಿಂದಲೇ ಶಿಕ್ಷಣದ ಗುಣಾತ್ಮಕತೆ ಹೆಚ್ಚುವುದು.
- ಅದು ಯಾರು ಏನು ಬಯಸುತ್ತಾರೆ ಎನ್ನುವುದನ್ನು ಅವಲಂಬಿಸಿರಬಾರದು. ಬದಲಾಗುತ್ತಿರುವ ಶೈಕ್ಷಣಿಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಕಲಿಯುತ್ತಾ ಕಲಿಸುವ ಅಂತಃಸತ್ವ ಹೊಂದಿರಬೇಕು,

ಇಂತಹ ಅಸ್ಮಿತೆಯನ್ನು ಬೆಳೆಸಿಕೊಳ್ಳಲು ಎಂತಹ ವಾತಾವರಣವಿರಬೇಕು?

ಶಿಕ್ಷಕರನ್ನು ಅವರ ಪಾಡಿಗೆ ಅವರ ಕರ್ತವ್ಯ ನಿರ್ವಹಿಸಲು ಬಿಡಬೇಕು. ನಾವು ತರಬೇತಿ ನೀಡಿ ತಯಾರು ಮಾಡುವ ಶಿಕ್ಷಕರ ಮೇಲೆ ನಮಗೇ ನಂಬಿಕೆಯಿಲ್ಲ ಎನ್ನುವುದು ಶಿಕ್ಷಕರ ಮೇಲಿನ ಟೀಕೆಯಲ್ಲ; ಅದು ನಮ್ಮ ಮೇಲೆ ನಾವೇ ಮಾಡಿಕೊಳ್ಳುವ ಟೀಕೆ!

ಸರಿ, ತಪ್ಪು, ಒಳ್ಳೆಯದು, ಕೆಟ್ಟದ್ದು ಎಂಬಿತ್ಯಾದಿ ತೀವ್ರ ನಿಲುವುಗಳಲ್ಲೇ ಶಿಕ್ಷಕರನ್ನು ಅರ್ಥೈಸಿಕೊಳ್ಳುವುದರ ಬದಲಾಗಿ ಅವರು ಬದಲಾವಣೆಯ ನಿರಂತರತೆಯಲ್ಲಿ ಅತ್ಯುತ್ತಮತೆಯತ್ತ ಮುಖ ಮಾಡಿರುವವರು ಮತ್ತು ಅದಕ್ಕಾಗಿ ಪ್ರಯತ್ನಿಸುತ್ತಿರುವವರು ಎಂಬುದನ್ನು ಗುರುತಿಸಿ ಅದೇ ಅವರ ಅಸ್ಮಿತೆಯಾಗುವಂತೆ ಪ್ರಯತ್ನಿಸಬೇಕು.

ನಾವು ವೈದ್ಯರು, ಇಂಜಿನಿಯರ್ ಮೊದಲಾದ ವೃತ್ತಿಪರರ ನಿರ್ಧಾರಗಳ ಕುರಿತಂತೆ, ಅವರ ವೃತ್ತಿಯ ಆಚರಣೆಗಳ ಕುರಿತಂತೆ ಮಾತನಾಡುವುದಿಲ್ಲ ಅಥವಾ ಅವರನ್ನು ಹೆಚ್ಚು ಪ್ರಶ್ನಿಸುವುದಿಲ್ಲ. ಆದರೆ ಶಿಕ್ಷಕರನ್ನು ಎಲ್ಲರೂ ಪ್ರಶ್ನಿಸುತ್ತಾರೆ. ಪ್ರತಿ ಶಿಕ್ಷಕರ ವೃತ್ತಿಪರ ವ್ಯಕ್ತಿತ್ವ ಅನನ್ಯ ಎಂದು ಪರಿಗಣಿಸುವುದೇ ನಮಗೆ ತಿಳಿದಂತಿಲ್ಲ. ಅವರ ವೃತ್ತಿಯ ಘನತೆಯನ್ನು ಗುರುತಿಸುವ ಸಮಾಜವು ಅವರಿಗೆ ನಿಜವಾದ ಅಸ್ಮಿತೆಯನ್ನು ತಂದುಕೊಡುತ್ತದೆ. ಆ ಅಸ್ಮಿತೆಯು ಅವರ ಕಾರ್ಯವೈಖರಿಯನ್ನು ಗುಣಾತ್ಮಕವಾಗಿ ಬದಲಾಯಿಸಬಲ್ಲದು.

ತಮ್ಮ ವೃತ್ತಿಪರ ಬೆಳವಣಿಗೆಗಾಗಿ ಶಿಕ್ಷಕರು ಕೈಗೊಳ್ಳುವ ಎಲ್ಲ ಚಟುವಟಿಕೆಗಳಿಗೆ ಮುಕ್ತ ಬೆಂಬಲ ನೀಡಬೇಕು.

ಅಂತಿಮವಾಗಿ ಶಿಕ್ಷಕರ ಅಸ್ಮಿತೆಗೆ ಅವರೇ ಕಾರಣರಾಗಬೇಕು. ತಮ್ಮ ನಿರ್ಧಾರಗಳನ್ನು, ತಮ್ಮ ವೃತ್ತಿಪರ ನಿಲುವುಗಳನ್ನು ಅವರೇ ರೂಢಿಸಿಕೊಳ್ಳಬೇಕು. ತಾವು

ಮಾಡುವ ಕೆಲಸದ ಬಗ್ಗೆ ಅವರಿಗೆಷ್ಟು ನಂಬಿಕೆ ಇದೆ ಎನ್ನುವುದರ ಮೇಲೆ ಅವರನ್ನು ಇತರರು ಗೌರವಿಸುತ್ತಾರೆ. ಶಿಕ್ಷಕರಲ್ಲಿ ಇಂತಹ ನಂಬಿಕೆ ಹರಳುಗಟ್ಟಲು ಅಗತ್ಯ ಬೆಂಬಲ ನೀಡುವುದೇ ಸಮಾಜ ಮಾಡಬಹುದಾದ ಅತ್ಯಂತ ದೊಡ್ಡ ಕೆಲಸ. ಇದರಿಂದ ಶಿಕ್ಷಕರು ಹೆಚ್ಚು ಹೆಚ್ಚು ವೃತ್ತಿಪರರಾಗಲು ಸಾಧ್ಯವಾಗುತ್ತದೆ. ಅಂತಿಮವಾಗಿ ಸಮಾಜ ಕಟ್ಟುವುದು ಇಂತಹ ವೃತ್ತಿಪರರಾದ ಶಿಕ್ಷಕರೇ.

ಶಿಕ್ಷಕರ ಅಸ್ಮಿತೆ ಕುರಿತಾದ ಇಂತಹ ಸಮಗ್ರ ಚಿಂತನೆ ನಮ್ಮಲ್ಲಿ ಅನೇಕ ಒಳನೋಟಗಳನ್ನು ಬೆಳೆಸಬಲ್ಲದು. ಶೈಕ್ಷಣಿಕ ಆಚರಣೆಗಳನ್ನು ವೈಯಕ್ತಿಕ, ಸಾಂಸ್ಥಿಕ, ಸಾಮುದಾಯಿಕ ನೆಲೆಗಳಿಂದ ಆಲೋಚಿಸುವಾಗ ಒಟ್ಟಾರೆ ಶಿಕ್ಷಣ ವ್ಯವಸ್ಥೆಯನ್ನು ಕಟ್ಟುವಲ್ಲಿ, ಸುಸ್ಥಿರವಾಗಿ ಬೆಳೆಸುವಲ್ಲಿ ಶಿಕ್ಷಕರೇ ಕೇಂದ್ರಬಿಂದುಗಳಾಗಿರುವುದು ಕಂಡುಬರುತ್ತದೆ. ಶೈಕ್ಷಣಿಕ ಯೋಜನೆಗಳ ರೂಪಣೆ, ಅನುಷ್ಠಾನ, ಮೌಲ್ಯಮಾಪನ ಹಾಗೂ ಅನಂತರದ ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ಶಿಕ್ಷಕರ ಪಾತ್ರ ಬಹಳ ಮುಖ್ಯವಾದುದು. ಮೇಲ್ನೋಟಕ್ಕೆ ಅವರು ಸರಕಾರದ ನೀತಿಗಳನ್ನು ಶೈಕ್ಷಣಿಕ ಚಿಂತನೆಯ ಹಿನ್ನೆಲೆಯಲ್ಲಿ ಅನುಷ್ಠಾನಿಸುವವರು ಎಂದು ಕಂಡುಬರುತ್ತದೆ. ಆದರೆ ಎಲ್ಲಿಯವರೆಗೆ ಶಿಕ್ಷಕರು ಇವೆಲ್ಲವನ್ನೂ ತಮ್ಮದಾಗಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವು ಅರ್ಥಪೂರ್ಣವಾಗುವುದಿಲ್ಲ. ಇವೆಲ್ಲವುಗಳ ಅನುಷ್ಠಾನದ ನೆಲೆ ಶಿಕ್ಷಕರಿಗೂ ಮಕ್ಕಳಿಗೂ ವೈಯಕ್ತಿಕವಾಗಿರುವುದು ಅತ್ಯಂತ ಅಪೇಕ್ಷಣೀಯ. ಆಗ ಅವರ ಅಸ್ಮಿತೆ ವ್ಯವಸ್ಥಿತ ಅಸ್ಮಿತೆಯೊಡನೆ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ. ಶಿಕ್ಷಕರಿಗೆ ಅವರ ಅಸ್ಮಿತೆಯನ್ನು ರೂಢಿಸಿಕೊಳ್ಳಲು ಅಗತ್ಯ ಬೆಂಬಲ ನೀಡುವುದು ಸಮಾಜವು ತನಗೆ ತಾನೇ ಮಾಡಿಕೊಳ್ಳುವ ಉಪಕಾರ.

(ಈ ಲೇಖನ ಶಿಕ್ಷಕರೊಂದಿಗಿನ ಒಡನಾಟ, ಶಿಕ್ಷಣ ತಜ್ಞರೊಂದಿಗಿನ ಸಂವಾದ ಹಾಗೂ ಸ್ವ-ಅನುಭವಗಳ ಆಧಾರದಲ್ಲಿ ರಚಿಸಲ್ಪಟ್ಟಿದೆ. ಈ ಚಿಂತನೆ ರೂಪಿಸಲು ಕಾರಣವಾದ ಎಲ್ಲರಿಗೂ ಕೃತಜ್ಞತೆಗಳು).

**ಕುಮಾರ ಸ್ವಾಮಿ ಎಚ್**. : ಶಿಕ್ಷಣದಲ್ಲಿ ಸ್ನಾತಕೋತ್ತರ ಮತ್ತು ಪಿಎಚ್.ಡಿ. ಪದವಿಗಳನ್ನು ಪಡೆದಿರುವ ಇವರು ಮಂಗಳೂರಿನ ಸರಕಾರಿ ಶಿಕ್ಷಕ ಶಿಕ್ಷಣ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರು. ಕಳೆದ 29 ವರ್ಷಗಳಿಂದ ಭಾಷಾ ಕಲಿಕೆ, ಚಿಂತನಶೀಲ ಆಚರಣೆಗಳು, ಶೈಕ್ಷಣಿಕ ಸಂಶೋಧನೆಗಳಿಗೆ ಸಂಬಂಧಿಸಿದಂತೆ ಸೇವಾಪೂರ್ವ ಹಾಗೂ ಸೇವಾನಿರತ ಶಿಕ್ಷಕ ತರಬೇತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ರಾಜ್ಯ ಹಾಗೂ ರಾಷ್ಟ್ರಮಟ್ಟದ ವಿಚಾರಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ಶೈಕ್ಷಣಿಕ ಕಾರ್ಯಾಗಾರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯ ನಿರ್ವಹಿಸಿರುತ್ತಾರೆ.

*ಸಂಪರ್ಕ:* kumaraswamy64@gmail.com